

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1478 |
| ವಿಧಾನ ಪರಿಷತ್ ಸದಸ್ಯರ ಹೆಸರು | : | ಶ್ರೀ ಕೆ.ಎ. ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿದವರು) |
| ಉತ್ತರಿಸುವ ದಿನಾಂಕ | : | 17-03-2021 |
| ಉತ್ತರಿಸುವ ಸಚಿವರು | : | ಸಮಾಜ ಕಲ್ಯಾಣ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಳೆದ 5 ವರ್ಷಗಳಲ್ಲಿ ರಾಜ್ಯದಲ್ಲಿ Pre-Metric ಹಾಗೂ National Overseas Scholarship ಯೋಜನೆ ಅಡಿಯಲ್ಲಿ ಎಷ್ಟು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನ ನೀಡಲಾಗಿದೆ; (ಸಂಪೂರ್ಣ ವಿವರ ನೀಡುವುದು) | ಸಮಾಜ ಕಲ್ಯಾಣ ಇಲಾಖೆ ಮತ್ತು ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಯ ವತಿಯಿಂದ ಮೆಟ್ರಿಕ್ ಪೂರ್ವ ವಿದ್ಯಾರ್ಥಿ ವೇತನ ಮತ್ತು National Overseas Scholarship ಯೋಜನೆಯಡಿಯಲ್ಲಿ ಮಂಜೂರು ಮಾಡಲಾದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದಗಳ ಒಟ್ಟು ವಿದ್ಯಾರ್ಥಿಗಳ ವಿವರಗಳನ್ನು ಈ ಕೆಳಕಂಡಂತೆ ನೀಡಿದೆ. |

| ವರ್ಷ | Pre-Metric ವಿದ್ಯಾರ್ಥಿ ವೇತನ ಮಂಜೂರು ಮಾಡಲಾದ ವಿದ್ಯಾರ್ಥಿಗಳ ಸಂಖ್ಯೆ | National Overseas Scholarship ಮಂಜೂರು ಮಾಡಲಾದ ಅಭ್ಯರ್ಥಿಗಳ ಸಂಖ್ಯೆ |
|---|---|---|
| 2015-16 | 8,44,133 | 52 |
| 2016-17 | 10,35,305 | 77 |
| 2017-18 | 12,54,726 | 30 |
| 2018-19 | 14,47,538 | 71 |
| 2019-20 | 12,95,557 | 59 |
| **ಒಟ್ಟು** | **58,77,259** | **289** |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಆ) | ಈ ವಿದ್ಯಾರ್ಥಿ ವೇತನ ನೀಡುವಲ್ಲಿ ವಿಳಂಭವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ ಈ ವಿಳಂಭವನ್ನು ಸರಿಪಡಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ಸಮಾಜ ಕಲ್ಯಾಣ ಇಲಾಖೆ ಮತ್ತು ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖಾ ವತಿಯಿಂದ ಅನುಷ್ಠಾನ ಮಾಡಲಾಗುತ್ತಿರುವ ಮೆಟ್ರಿಕ್ ಪೂರ್ವ ವಿದ್ಯಾರ್ಥಿವೇತನ ಕಾರ್ಯಕ್ರಮವನ್ನು 2017-18ರ ವರೆಗೆ SMIS ತಂತ್ರಾಂಶದ ಮೂಲಕ ಮಂಜೂರು ಮಾಡಲಾಗುತ್ತಿತ್ತು. 2018-19 ರಿಂದ ಇ-ಆಡಳಿತ ಇಲಾಖೆಯು ಅಭಿವೃದ್ಧಿ ಪಡಿಸಿರುವ ರಾಜ್ಯ ವಿದ್ಯಾರ್ಥಿವೇತನ ಪೋರ್ಟಲ್ (SSP) ಮೂಲಕ ಅನುಷ್ಠಾನ ಮಾಡಲಾಗುತ್ತಿದೆ.<br><br>ವಿದ್ಯಾರ್ಥಿವೇತನದ ಮೊತ್ತವನ್ನು ಡಿ.ಬಿ.ಟಿ. ಪೋರ್ಟಲ್ ಮೂಲಕ ವಿದ್ಯಾರ್ಥಿಗಳ ಆಧಾರ್ ಜೋಡಿತ ಬ್ಯಾಂಕ್ ಖಾತೆಗೆ ನೇರವಾಗಿ ಜಮೆ ಮಾಡಲಾಗುತ್ತಿದ್ದು, ವಿದ್ಯಾರ್ಥಿಯ ಬ್ಯಾಂಕ್ ಖಾತೆಗೆ ಆಧಾರ್ ಜೋಡಣೆಯಾಗಿದ್ದರೇ ಯಾವುದೇ ವಿಳಂಭವಿಲ್ಲದೇ ವಿದ್ಯಾರ್ಥಿವೇತನವನ್ನು ನೀಡಲಾಗಿದೆ. ಆದರೆ, ವಿದ್ಯಾರ್ಥಿಯ ಬ್ಯಾಂಕ್ ಖಾತೆಯು ಆಧಾರ್‌ಗೆ ಜೋಡಣೆಯಾಗದೇ ಇದ್ದರೇ, ಶಿಕ್ಷಣ ಇಲಾಖೆಯ SATS Data ಮತ್ತು Aadhar Name Mismatch ಆಗಿದ್ದರೇ, ಅಂತಹ |

| | | |
|---|---|---|
| | | ಪ್ರಕರಣಗಳಲ್ಲಿ ವಿದ್ಯಾರ್ಥಿವೇತನ ಮಂಜೂರಾತಿ ಮಾಡಲು ವಿಳಂಬವಾಗುತ್ತಿದೆ. ಈ ಹಿನ್ನೆಲೆಯಲ್ಲಿ ಸದರಿ ತಾಂತ್ರಿಕ ಸಮಸ್ಯೆಗಳನ್ನು ಸರಿಪಡಿಸಿ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿವೇತನವನ್ನು ಆದಷ್ಟು ಬೇಗನೆ ಬಿಡುಗಡೆ ಮಾಡಲು ಕ್ರಮ ವಹಿಸಲಾಗುತ್ತಿದೆ. |
| ಇ) | National Overseas Scholarship ಹಂಚಿಕೆಯಲ್ಲಿ ನಿಗದಿಪಡಿಸಿರುವ ಅರ್ಹತೆ ಮಾನದಂಡ ಕಠಿಣವಾಗಿರುವುದರಿಂದ ಹಾಗೂ ಹಿಂದೆ ನೀಡುತ್ತಿದ್ದ ವಿದ್ಯಾರ್ಥಿವೇತನದ ಮೊತ್ತ ಬಹಳ ಕಡಿಮೆ ಆಗಿರುವುದರಿಂದ, ಪರಿಶಿಷ್ಟ ಜಾತಿ ಮತ್ತು ಪಂಗಡಕ್ಕೆ ಸೇರಿದ ವಿದ್ಯಾರ್ಥಿಗಳು ಉನ್ನತ ಶಿಕ್ಷಣ ಪಡೆಯಲು ವಿಫಲರಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು? | ಸಮಾಜ ಕಲ್ಯಾಣ ಇಲಾಖೆ ಮತ್ತು ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖಾ ವತಿಯಿಂದ ಪ್ರಬುದ್ಧ ಯೋಜನೆಯಡಿ ವಿದೇಶಿ ವಿಶ್ವ ವಿದ್ಯಾಲಯದಲ್ಲಿ ಉನ್ನತ ವ್ಯಾಸಂಗಕ್ಕೆ ಆಯ್ಕೆಯಾದ ಅಭ್ಯರ್ಥಿಗಳಿಗೆ ಪ್ರಸ್ತುತ ಒದಗಿಸುತ್ತಿರುವ ಧನಸಹಾಯವು ಅಭ್ಯರ್ಥಿಗಳ ವ್ಯಾಸಂಗಕ್ಕೆ ಧನಸಹಾಯದ ಕೊರತೆಯಾಗಿರುವುದಿಲ್ಲ. ಅಲ್ಲದೇ ಅಭ್ಯರ್ಥಿಗಳ ಆಯ್ಕೆಗೆ ಸಂಬಂಧಿಸಿದಂತೆ ಆಯಾ ವಿಶ್ವ ವಿದ್ಯಾಲಯಗಳು ನಿಗಧಿಪಡಿಸುವ ಮಾನದಂಡಗಳನ್ನು ಆಧರಿಸಿ, ಕಾಲಕಾಲಕ್ಕೆ ಆಯ್ಕೆ ಮಾನದಂಡಗಳನ್ನು ಪರಿಷ್ಕರಿಸಿ ಅಭ್ಯರ್ಥಿಗಳಿಗೆ ಅನುಕೂಲ ಕಲ್ಪಿಸಲಾಗುತ್ತಿದೆ. ಆಯ್ಕೆಯಾದ ಅಭ್ಯರ್ಥಿಗಳಿಗೆ ಸದರಿ ಯೋಜನೆಯಡಿ ಒದಗಿಸುವ ಧನಸಹಾಯದ ವಿವರಗಳು ಈ ಕೆಳಕಂಡಂತಿದೆ.<br><br>ಸರ್ಕಾರದ ಮಾರ್ಗಸೂಚಿಯಲ್ಲಿ ಅಭ್ಯರ್ಥಿಗಳಿಗೆ ಧನ ಸಹಾಯವನ್ನು ಈ ಕೆಳಕಂಡಂತೆ ನಿಗಧಿಪಡಿಸಲಾಗಿದೆ.<br>**ಧನಸಹಾಯ:-** |

| ಕ್ರ. ಸಂ. | ವಾರ್ಷಿಕ ಆದಾಯ | ಸಹಾಯಧನ |
|---|---|---|
| 1 | 8.00 ಲಕ್ಷದ ವರೆಗಿನ ಕುಟುಂಬದ ವಾರ್ಷಿಕ ಆದಾಯ ಹೊಂದಿರುವ ಅಭ್ಯರ್ಥಿಗಳಿಗೆ. | ವಿಶ್ವವಿದ್ಯಾನಿಲಯದ ಕೋರ್ಸ್ ಶುಲ್ಕ – ಶೇ 100<br>ನಿರ್ವಹಣಾ ವೆಚ್ಚ ಗರಿಷ್ಠ – 8.ಲಕ್ಷಗಳು (ನಿರ್ವಾಹಣ ವೆಚ್ಚದ ಶೇ.75 ಅಥವಾ 8.00 ಲಕ್ಷಗಳು ಎರಡರಲ್ಲಿ ಯಾವುದು ಕಡಿಮೆಯೋ ಅದನ್ನು ಪಾವತಿಸಲಾಗುವುದು)<br>ವೀಸಾ ಶುಲ್ಕ (ವಾಸ್ತವಿಕ) – ಶೇ 100<br>ವಿಮಾ ಶುಲ್ಕ (ವಾಸ್ತವಿಕ) – ಶೇ 100<br>ಪುಸ್ತಕ ಮತ್ತು ಇತರೆ ಶುಲ್ಕ – 1 ಲಕ್ಷ<br>ವಿಮಾನ ಪ್ರಯಾಣ ವೆಚ್ಚ – ಶೇ.100<br><br>(ಕೋರ್ಸ್ ಪೂರ್ಣಾವಧಿಯಲ್ಲಿ ಒಂದು ಬಾರಿ ಮಾತ್ರ ಏಕನಾಮಿಕ್ ಕ್ಲಾಸ್ ನಲ್ಲಿ ವಿದೇಶದಲ್ಲಿ ವ್ಯಾಸಂಗಕ್ಕೆ ಪ್ರಯಾಣಿಸಲು ಮತ್ತು ವಿದೇಶದಿಂದ ಒಂದು ಬಾರಿ ಸ್ವದೇಶಕ್ಕೆ ಪ್ರಯಾಣಿಸಲು ಅವಕಾಶವಿರುತ್ತದೆ.) |
| 2 | 8.00 ಲಕ್ಷದಿಂದ 15.00 ಲಕ್ಷದ ವರೆಗಿನ ಕುಟುಂಬದ ವಾರ್ಷಿಕ ಆದಾಯ ಹೊಂದಿರುವ ಅಭ್ಯರ್ಥಿಗಳಿಗೆ. | ಈ ಮೇಲ್ಕಂಡ ಎಲ್ಲಾ ವೆಚ್ಚದಲ್ಲಿ ಶೇ. 50 ರಷ್ಟು ವೆಚ್ಚವನ್ನು ಪಾವತಿಸಲಾಗುವುದು. |

| | | |
|---|---|---|
| 3 | 15.00 ಲಕ್ಷದಿಂದ 25.00 ಲಕ್ಷದ ವರೆಗಿನ ಕುಟುಂಬದ ವಾರ್ಷಿಕ ಆದಾಯ ಹೊಂದಿರುವ ಅಭ್ಯರ್ಥಿಗಳಿಗೆ. | ಈ ಮೇಲ್ಕಂಡ ಎಲ್ಲಾ ವೆಚ್ಚದಲ್ಲಿ ಶೇ. 33 ರಷ್ಟು ವೆಚ್ಚವನ್ನು ಪಾವತಿಸಲಾಗುವುದು. |

ಕುಟುಂಬದ ವಾರ್ಷಿಕ ಆದಾಯ ರೂ. 2.5ಲಕ್ಷದ ಮಿತಿಯೊಳಗಿರುವ ಅಭ್ಯರ್ಥಿಗಳಿಗೆ ನಿರ್ವಹಣಾ ವೆಚ್ಚಕ್ಕೆ ಒಂದು ವರ್ಷಕ್ಕೆ ನಿಗಧಿಯಾದ ರೂ. 8.00 ಲಕ್ಷದಲ್ಲಿ ರೂ. 2:00 ಲಕ್ಷಗಳನ್ನು ಅಭ್ಯರ್ಥಿಯು ವಿದೇಶಕ್ಕೆ ತೆರಳಲು 5 ದಿನ ಬಾಕಿ ಇರುವಾಗ ಅಭ್ಯರ್ಥಿಯ ಸ್ಥಳೀಯ ಬ್ಯಾಂಕ್ ಖಾತೆಗೆ ವರ್ಗಾಯಿಸಲಾಗುತ್ತದೆ.

ಕುಟುಂಬದ ವಾರ್ಷಿಕ ಆದಾಯ ರೂ.2.5ಲಕ್ಷದ ಮಿತಿಯೊಳಗಿರುವ ಅಭ್ಯರ್ಥಿಗಳ ವೀಸಾ ವೆಚ್ಚವನ್ನು ಹಾಗೂ ವಿದೇಶಕ್ಕೆ ಹೋಗುವ ವಿಮಾನ ಯಾನ ವೆಚ್ಚವನ್ನು ಇಲಾಖಾ ವತಿಯಿಂದ ಮುಂಚಿತವಾಗಿ ಪಾವತಿಸಲಾಗುವುದು.

ವಿದ್ಯಾರ್ಥಿಗಳ ಆಯ್ಕೆಗೆ ನಿಗಧಿಪಡಿಸಲಾಗಿದ್ದ ಜಿ.ಆರ್.ಇ. ಜಿ.ಮ್ಯಾಟ್. ಸೇರಿದಂತೆ ಕೆಲವೊಂದು ಪರೀಕ್ಷೆಗಳಿಗೆ ವಿನಾಯ್ತಿ ನೀಡಿ ಪರಿಷ್ಕೃತ ಮಾರ್ಗಸೂಚಿಯನ್ನು ಹೊರಡಿಸುವ ಬಗ್ಗೆ ಪರಿಶೀಲಿಸಿ ಕ್ರಮ ವಹಿಸಲಾಗುವುದು.

ಸಕಇ 117 ಪಕವಿ 2021

(ಬಿ. ಶ್ರೀರಾಮುಲು)
ಸಮಾಜ ಕಲ್ಯಾಣ ಸಚಿವರು.